# ಸಮಾಜ ಮನೋವಿಜ್ಞಾನ

## ಇಂದಿರಾ ಜೈಪ್ರಕಾಶ್

ಕಿಟ್ಟಿ ಜೆನೊವೀಸ್‌ಳ ಅಪಾರ್ಟಮೆಂಟ್ ಹೊರಗೆ ಒಬ್ಬ ಅವಳನ್ನು ಚಾಕುವಿನಿಂದ ಇರಿದ. ಅವಳು ನರಳಾಡುತ್ತಾ ಬೀದಿಯಲ್ಲಿ ಬಿದ್ದಿದ್ದಳು. ಸುತ್ತಲಿನ ಅಪಾರ್ಟಮೆಂಟ್‌ನ ಒಬ್ಬರೂ ಅವಳ ಸಹಾಯಕ್ಕೆ ಬರಲಿಲ್ಲ. ಕೊಲೆಗಡುಕ ಮರಳಿ ಬಂದು ಅವಳನ್ನು ಮತ್ತೆ ಇರಿದ. 1964ರಲ್ಲಿ ನ್ಯೂಯಾರ್ಕ್ ಸಿಟಿಯಲ್ಲಿ ನಡೆದ ಈ ಘಟನೆ ನೆರೆಹೊರೆಯವರ ವರ್ತನೆಯ ಬಗ್ಗೆ ಅನೇಕ ಪ್ರಶ್ನೆಗಳನ್ನು ಹುಟ್ಟಿಸಿತು. ಅಷ್ಟೊಂದು ಜನರಿದ್ದರೂ ಏಕೆ ಅವಳ ಸಹಾಯಕ್ಕೆ ಒಬ್ಬರೂ ಮುಂದೆ ಬರಲಿಲ್ಲ? ಬಿಬ್ ಲಾಟೆನಾ (Bib Latana) ಮತ್ತು ಜಾನ್ ಡಾರ್ಲಿ (John Darley) ಈ ವಿಷಯವನ್ನು ಕೈಗೆತ್ತಿಕೊಂಡು ಜವಾಬ್ದಾರಿ ಹೇಗೆ ಹಂಚಿಹೋಗುತ್ತದೆ ಎಂಬುದರ ಬಗ್ಗೆ ಸಂಶೋಧನೆ ನಡೆಸಿದರು. ಅಪಾಯ ಸನ್ನಿವೇಶಗಳಲ್ಲಿ ಸಿಲುಕಿದಾಗ ಸುತ್ತಲೂ ಜನರ ಸಂಖ್ಯೆ ಹೆಚ್ಚು ಇದ್ದಷ್ಟೂ ಸಹಾಯ ಸಿಗುವ ಸಂಭವ ಕಡಮೆಯಾಗುತ್ತದೆ, ಏಕೆಂದರೆ ಬೇರೆಯವರು ವ್ಯಕ್ತಿಗೆ ಸಹಾಯ ಮಾಡುತ್ತಾರೆ ಎಂದು ಜನ ನಂಬಿ ಸುಮ್ಮನಾಗುತ್ತಾರೆ ಎಂದು ಅವರ ಆವಿಷ್ಕಾರಗಳು ಸೂಚಿಸಿದವು.

ಮಾನವರಂತೆ ಹುಟ್ಟಲು ನಮ್ಮ ವಂಶವಾಹಿಗಳು ಕಾರಣವಾದರೂ ಮಾನವರಂತೆ ವರ್ತಿಸಲು ಕಲಿಸುವುದು ಸಮಾಜ. ವ್ಯಕ್ತಿ ಮತ್ತು ಸಾಮಾಜಿಕ ಸನ್ನಿವೇಶಗಳ ಅಂತರಕ್ರಿಯೆಯನ್ನು ಪರಿಶೀಲಿಸುವುದು ಸಮಾಜ ಮನೋವಿಜ್ಞಾನ. ಜನರ ಆಲೋಚನೆಗಳು, ಭಾವನೆಗಳು, ವರ್ತನೆಗಳು ಹೇಗೆ ಇತರರ ಇರುವಿನಿಂದ ಪ್ರಭಾವಿತಗೊಳ್ಳುತ್ತದೆ ಎಂದು ಅಧ್ಯಯನ ಮಾಡುವ ಕ್ಷೇತ್ರ ಇದು. ಜನರು ಪಕ್ಕದಲ್ಲೇ ಇರಬಹುದು ಅಥವಾ ಅವರ ನೆನೆಪು, ಅವರ ಆಲೋಚನೆಗಳು, ಅವರ ಆದೇಶಗಳೂ ಕೂಡಾ ವರ್ತನೆಯನ್ನು ನಿಯಂತ್ರಿಸಬಹುದು. ಉದಾಹರಣೆಗೆ, ಮಗು ತಾಯಿ ಎದುರಿಗೆ ಇಲ್ಲದಿದ್ದರೂ ಅವಳು ಬೀದಿಗೆ ಹೋಗಬೇಡ ಎಂದು ಅಪ್ಪಣೆ ಮಾಡಿದ್ದನ್ನು ನೆನೆಸಿಕೊಂಡು ಬಾಗಿಲಲ್ಲೇ ನಿಲ್ಲಬಹುದು. ವರ್ತನೆಯ ಸಾಮಾಜಿಕ ಸನ್ನಿವೇಶವನ್ನು ಅಧ್ಯಯನ ಮಾಡುವುದು ಈ ಕ್ಷೇತ್ರದ ಉದ್ದೇಶ.

ಟ್ರಿಪ್ಲೆಟ್ (Triplett) ಎನ್ನುವವನು ಗುಂಪುಗಳಲ್ಲಿ ಜನ ಹೇಗೆ ವರ್ತಿಸುತ್ತಾರೆ ಎಂದು 1898ರಲ್ಲೇ ಪ್ರಯೋಗ ನಡೆಸಿದ್ದನು. ಮೆಕ್ಡುಗಲ್ (McDougall) ಸಮಾಜ ಮನೋವಿಜ್ಞಾನದ ವಿಷಯದ ಬಗ್ಗೆ ಒಂದು ಪುಸ್ತಕವನ್ನು 1908ರಲ್ಲೇ ಹೊರತಂದಿದ್ದನಾದರೂ ಕರ್ಟ್ ಲೂಯಿನ್ (Kurt Lewin) ಸಾಧಾರಣವಾಗಿ **'ಸಮಾಜ ಮನೋವಿಜ್ಞಾನದ ಜನಕ'** ಎಂದು ಗುರುತಿಸಲ್ಪಡುತ್ತಾನೆ. ಲೂಯಿನ್ ಸಮಗ್ರ ಸಮಷ್ಟಿಯ ಸಿದ್ಧಾಂತ (Gestalt theory (ಗೆಸ್ಟಾಲ್ಟ್

ಸಿದ್ಧಾಂತ)) ಗಳಿಂದ ಪ್ರಭಾವಿತನಾಗಿದ್ದು 1930ರ ದಶಕದಲ್ಲಿ ಪ್ರಬಲವಾಗಿದ್ದ ಮನೋವಿಶ್ಲೇಷಣೆ ಮತ್ತು ವರ್ತನಾವಾದಗಳನ್ನು ವಿರೋಧಿಸಿ ಹೊಸ ಶಾಖೆಗೆ ಕಾರಣನಾದ. ಎರಡನೆಯ ಮಹಾಯುದ್ಧದ ಸಮಯದಲ್ಲಿ ಹಿಟ್ಲರ್ ನಂತಹ ಸರ್ವಾಧಿಕಾರಿಯನ್ನು ಹೇಗೆ ಜನ ಅಂಗೀಕರಿಸುತ್ತಾರೆ ಎಂಬ ಕುತೂಹಲ ಅನೇಕ ಅಧ್ಯಯನಗಳಿಗೆ ಮೂಲವಾಯಿತು. ಮುಝಾಫರ್ ಶೆರೀಫ್ (Muzafer Sherif), ಸೊಲೊಮೆನ್ ಆಶ್ (Solomon Asch) ಮತ್ತು ಸ್ಟ್ಯಾನ್ಲಿ ಮಿಲ್ಗ್ರಾಮ್ (Stanley Milgram) ಹೇಗೆ ಅಧಿಕಾರದಲ್ಲಿರುವವರು ಜನರನ್ನು ತಮ್ಮ ಅಮಾನವೀಯ ಆದೇಶಗಳನ್ನು ಪಾಲಿಸಲು ಒತ್ತಡ ತರುತ್ತಾರೆ ಎಂದು ಅಧ್ಯಯನ ಮಾಡಿದರು. ಝಿಂಬಾರ್ಡೊ (Zimbardo) ನಡೆಸಿದ ಪ್ರಯೋಗದಲ್ಲಿ ವಿದ್ಯಾರ್ಥಿಗಳು ತಮಗೆ ವಹಿಸಿದ್ದ 'ಜೈಲು ಅಧಿಕಾರಿಗಳ' ಪಾತ್ರವನ್ನು ಅಳವಡಿಸಿಕೊಂಡು 'ಕೈದಿ'ಗಳಾಗಿದ್ದ ವಿದ್ಯಾರ್ಥಿಗಳಿಗೆ ಹಿಂಸೆ ನೀಡುವುದನ್ನು ನೋಡಿ ಪ್ರಯೋಗವನ್ನು ಅರ್ಧಕ್ಕೆ ನಿಲ್ಲಿಸ ಬೇಕಾಯಿತು.

ಗುಂಪುಗಳ ವರ್ತನೆಯೂ ಅಧ್ಯಯನಕ್ಕೆ ಒಳಪಟ್ಟ ವಿಷಯ. ಗುಂಪುಗಳು ಹೇಗೆ ಹುಟ್ಟುತ್ತವೆ, ಅವುಗಳಲ್ಲಿ ನಾಯಕತ್ವ ಹೇಗೆ ನಿರ್ಧರಿತವಾಗುತ್ತದೆ, ಬುದ್ಧಿವಂತರೆನಿಸಿಕೊಂಡ ಜನರು ಗುಂಪಿನಲ್ಲಿ ಸೇರಿದಾಗ ಮೂರ್ಖತನದ ನಿರ್ಧಾರಗಳನ್ನು ಮಾಡಿ ಹೇಗೆ ದುರಂತಗಳಿಗೆ ಕಾರಣರಾಗುತ್ತಾರೆ ಮುಂತಾದ ವಿಷಯಗಳು ಬಹಳ ಪ್ರಸ್ತುತವಾಗಿವೆ. ಸಮಾಜ ಮನೋವಿಜ್ಞಾನಿಗಳು ಪೂರ್ವಾಗ್ರಹಗಳು ಮತ್ತು ಅಭಿವೃತ್ತಿಗಳ ಬಗೆಗಿರುವ ತಮ್ಮ ಜ್ಞಾನವನ್ನು ಸಮಾಜ ಸುಧಾರಣೆಗೆಂದು ಬಳಸುತ್ತಾರೆ. 1954 ರಲ್ಲೇ ಅಮೇರಿಕಾದ ಉಚ್ಚನ್ಯಾಯಾಲಯದಲ್ಲಿ ಜನಾಂಗ ತಾರತಮ್ಯತೆಯ ವಿರುದ್ಧ ಸಮಾಜ ಮನೋವಿಜ್ಞಾನಿಗಳು ಸಾಕ್ಷ್ಯ ನೀಡಿದ್ದರು. ಅವರ ಹೇಳಿಕೆಗಳು ಅಮೇರಿಕಾದ ಶಾಲೆಗಳಲ್ಲಿ 'ಬಿಳಿ' 'ಕರಿ' ಮಕ್ಕಳನ್ನು ಪ್ರತ್ಯೇಕಿಸುವ ಪದ್ಧತಿಯನ್ನು ತೊಡೆದುಹಾಕಲು ಸಹಾಯಮಾಡಿತ್ತು. ಲಿಯಾನ್ ಫೆಸ್ಟಿಂಗರ್ (Leon Festinger) ಸಂಜ್ಞಾನಾತ್ಮಕ ತತ್ವಗಳನ್ನು ಉಪಯೋಗಿಸಿಕೊಂಡು ಹೇಗೆ ಜಾಹೀರಾತುಗಳು ಜನರ ಮನವೊಲಿಸುತ್ತವೆ ಎಂದು ವಿಶ್ಲೇಷಿಸಿದ. ಮುಂದೆ ಅಭಿವೃತ್ತಿಯ ಅಧ್ಯಯನಗಳು ನಾವು ಸಮಾಜದ ಬಗ್ಗೆ ಅನುಭವದಿಂದ ಕಲಿತಿದ್ದು ಅದು ಹೇಗೆ ನಮ್ಮ ಸ್ಮೃತಿ, ಮಾಹಿತಿ ಸಂಸ್ಕರಣ, ಅಭಿವೃತ್ತಿ ಮತ್ತು ನಿರ್ಧಾರಗಳನ್ನು ಪ್ರಭಾವಿಸುತ್ತದೆ ಎಂದು ತೋರಿಸಿಕೊಟ್ಟವು.

ಆಕ್ರಮಣ ಪ್ರವೃತ್ತಿ, ಪರೋಪಕಾರ ಸ್ವಭಾವ, ಸ್ಪರ್ಧಾತ್ಮಕ ವರ್ತನೆ, ಸಹಕಾರ, ಸ್ವಾರ್ಥ, ಮುಂತಾದ ವರ್ತನೆಗಳು ಸಾಮಾಜಿಕ ಸನ್ನಿವೇಶದಲ್ಲಿ ಹೇಗೆ ಹುಟ್ಟುತ್ತವೆ ಎಂದು ಸಮಾಜ ಮನೋವಿಜ್ಞಾನಿಗಳು ಪರೀಕ್ಷಿಸುತ್ತಾರೆ. ತಮ್ಮ ಪರಿಣಿತಿಯನ್ನು ಜನರ ಪೂರ್ವಾಗ್ರಹಗಳನ್ನು ಬದಲಿಸಲು, ಜನಾಂಗೀಯ ವೈಷಮ್ಯ ತಡೆಗಟ್ಟಲು, ಹದಿಹರೆಯದವರು ಸಮವಯಸ್ಕರ ಒತ್ತಡಕ್ಕೆ ಮಣಿದು ಅನೈತಿಕ ಕಾರ್ಯಗಳಲ್ಲಿ ತೊಡಗುವುದನ್ನು ತಡೆಯಲು, ಸಾಮಾಜಿಕ ಜಾಲತಾಣಗಳ ಪ್ರಭಾವ ತಗ್ಗಿಸಲು ಕೆಲಸ ಮಾಡುತ್ತಾರೆ. ಮಾನಸಿಕ ಆರೋಗ್ಯಕ್ಕೆ ಸಾಮಾಜಿಕ ಸಂಬಂಧಗಳ ಮಹತ್ವ ಗುರುತಿಸಿ ಈಗ ಚಿಕಿತ್ಸಾ ಕ್ರಮಗಳಲ್ಲಿ ಸಾಮಾಜಿಕ ಕಾರಕಗಳಿಗೆ ಒತ್ತು ನೀಡಲಾಗುತ್ತಿದೆ. ಸಮಾಜ ಮನೋವಿಜ್ಞಾನದ ಜ್ಞಾನವಿಲ್ಲದೆ ಮಾನಸಿಕ ಆರೋಗ್ಯ

ಕಾರ್ಯಕ್ರಮಗಳನ್ನು ಸಫಲಗೊಳಿಸಲಾಗುವುದಿಲ್ಲ. ***ಸಮಾಜ ನರವಿಜ್ಞಾನ*** ಎನ್ನುವ ಉಪಶಾಖೆ ಹುಟ್ಟಿಕೊಂಡಿದ್ದು ಅದು ನಮ್ಮ ಸಾಮಾಜಿಕ ವರ್ತನೆ ಹೇಗೆ ಮಿದುಳಿನ ಚಟುವಟಿಕೆಯನ್ನು ಪ್ರಭಾವಿಸುತ್ತದೆ ಮತ್ತು ಅದರಿಂದ ಪ್ರಭಾವಿತವಾಗುತ್ತದೆ ಎಂದು ಅಧ್ಯಯನ ಮಾಡುತ್ತದೆ.

.